# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 669
2. ಸದಸ್ಯರ ಹೆಸರು : ಶ್ರೀ. ಕೆ.ಎ. ತಿಪ್ಪೇಸ್ವಾಮಿ (ನಾಮ ನಿರ್ದೇಶನ ಹೊಂದಿದವರು)
3. ಉತ್ತರಿಸಬೇಕಾದ ದಿನಾಂಕ : 04.03.2021

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು ಬರಪೀಡಿತ ಮತ್ತು ಗಡಿನಾಡು ಪರದೇಶವಾಗಿದ್ದು, ಈ ತಾಲ್ಲೂಕಿನಲ್ಲಿ ಬರಪೀಡಿತ ಮತ್ತು ಕುಡಿಯುವ ನೀರಿನ ಅಭಾವಕ್ಕೆ ಪ್ರತಿ ವರ್ಷವೂ ಒಳಗಾಗುವ ಗ್ರಾಮಗಳಿಗೆ ಕುಡಿಯುವ ನೀರು ಒದಗಿಸಲು ಮತ್ತು ಕೆರೆ ತುಂಬಿಸುವ ಮೂಲಕ ನೀರಾವರಿ ಸೌಕರ್ಯ ಕಲ್ಪಿಸಲು ಹೇಮಾವತಿ ಜಲಾಶಯ ಯೋಜನೆ, ಭದ್ರಾ ಮೇಲ್ದಂಡೆ ಯೋಜನೆ ಮತ್ತು ಎತ್ತಿನಹೊಳೆ ಯೋಜನೆ ಅಡಿಯಲ್ಲಿ ರಾಜ್ಯ ಸರ್ಕಾರ ಯೋಜನೆಗಳನ್ನು ರೂಪಿಸಿರುವುದು ನಿಜವೇ; ಹಾಗಿದ್ದಲ್ಲಿ, ಸಂಪೂರ್ಣ ವಿವರ ಒದಗಿಸುವುದು; | ವಿಶ್ವೇಶ್ವರಯ್ಯ ಜಲ ನಿಗಮದಡಿ ಭದ್ರಾ ಮೇಲ್ದಂಡೆ ಯೋಜನೆ ಹಾಗೂ ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>**1. ಭದ್ರಾ ಮೇಲ್ದಂಡೆ ಯೋಜನೆ:**<br><br>ಭದ್ರಾ ಮೇಲ್ದಂಡೆ ಯೋಜನೆಯಡಿ ಚಿಕ್ಕಮಗಳೂರು, ಚಿತ್ರದುರ್ಗ, ದಾವಣಗೆರೆ ಹಾಗೂ ತುಮಕೂರು ಜಿಲ್ಲೆಗಳ 2,25,515 ಹೆಕ್ಟೇರ್ ಭೂ ಪ್ರದೇಶಕ್ಕೆ ಸೂಕ್ಷ್ಮ ನೀರಾವರಿ ಮೂಲಕ ನೀರಾವರಿ ಸೌಲಭ್ಯ ಕಲ್ಪಿಸಲು ಮತ್ತು ಈ ಜಿಲ್ಲೆಗಳ 367 ಸಣ್ಣ ನೀರಾವರಿ ಕೆರೆಗಳನ್ನು ಅವುಗಳ ಸಾಮರ್ಥ್ಯದ ಶೇ.50 ರಷ್ಟು ನೀರನ್ನು ತುಂಬಿಸಲು ಯೋಜಿಸಲಾಗಿರುತ್ತದೆ. ಈ ಯೋಜನೆಯಡಿ ಶಿರಾ ತಾಲ್ಲೂಕಿನ 62 ಕೆರೆಗಳನ್ನು ಅವುಗಳ ಸಾಮರ್ಥ್ಯದ ಶೇ.50 ರಷ್ಟು ತುಂಬಿಸಲು ಹಾಗೂ 14,558 ಹೆಕ್ಟೇರ್ ಭೂ ಪ್ರದೇಶಕ್ಕೆ ಸೂಕ್ಷ್ಮ ನೀರಾವರಿ ಸೌಲಭ್ಯ ಕಲ್ಪಿಸಲು ಯೋಜಿಸಲಾಗಿರುತ್ತದೆ. ಕೆರೆಗಳ ವಿವರವನ್ನು **ಅನುಬಂಧ**ದಲ್ಲಿ ಲಗತ್ತಿಸಲಾಗಿದೆ. |
| ಆ) | ಹೇಮಾವತಿ ಜಲಾಶಯ ಯೋಜನೆಯ ಎಡದಂತೆ ನಾಲಾದಿಂದ ಶಿರಾ ತಾಲ್ಲೂಕಿನ ಯಾವ ಯಾವ ಗ್ರಾಮಗಳಿಗೆ ನೀರು ಪೂರೈಸಲಾಗುತ್ತಿದೆ; (ಸಂಪೂರ್ಣ ವಿವರ ನೀಡುವುದು) | **2. ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆ:**<br>ಕುಡಿಯುವ ನೀರಿನ ತೀವ್ರ ಅಭಾವ ಎದುರಿಸುತ್ತಿರುವ ರಾಜ್ಯದ ಹಾಸನ, ಚಿಕ್ಕಮಗಳೂರು, ತುಮಕೂರು, ಬೆಂಗಳೂರು ಗ್ರಾಮಾಂತರ, ರಾಮನಗರ, ಚಿಕ್ಕಬಳ್ಳಾಪುರ ಹಾಗೂ ಕೋಲಾರ ಜಿಲ್ಲೆಗಳಿಗೆ ಪಶ್ಚಿಮ ಘಟ್ಟದಲ್ಲಿ ಹರಿಯುವ ಹಳ್ಳಗಳಿಂದ 24.01 ಟಿ.ಎಂ.ಸಿ ನೀರನ್ನು ಬಳಸಿಕೊಂಡು ಕುಡಿಯುವ ನೀರು ಒದಗಿಸಲು ಹಾಗೂ ಅಂತರ್ಜಲ ಮರುಪೂರಣಕ್ಕಾಗಿ ಈ ಭಾಗಗಳಲ್ಲಿನ 527 ಸಣ್ಣ ನೀರಾವರಿ ಕೆರೆಗಳಿಗೆ ಅವುಗಳ ಸಾಮರ್ಥ್ಯದ ಶೇ.50% ರಷ್ಟು ನೀರು ತುಂಬಿಸಲು ಯೋಜಿಸಲಾಗಿದೆ. ಈ ಯೋಜನೆಯಡಿ ಶಿರಾ ತಾಲ್ಲೂಕಿಗೆ 0.514 ಟಿ.ಎಂ.ಸಿ ನೀರನ್ನು ಕುಡಿಯುವ ನೀರಿಗಾಗಿ ಸರಬರಾಜು ಮಾಡಲು ಸಂಬಂಧಿಸಿದ ಇಲಾಖೆಗೆ Bulksupply ಮೂಲಕ ನೀಡಲು ಯೋಜಿಸಲಾಗಿದೆ.<br><br>**3. ಹೇಮಾವತಿ ಜಲಾಶಯ ಯೋಜನೆ:**<br><br>ಕಾವೇರಿ ನೀರಾವರಿ ನಿಗಮದ ವ್ಯಾಪ್ತಿಗೆ ಸಂಬಂಧಿಸಿದಂತೆ ಸರ್ಕಾರದ ಪತ್ರ ಸಂಖ್ಯೆ: ನೀಇ 196 ಎನ್ ಹೆಚ್ ಪಿ 2000 ದಿ: 28.07.2000 ರಲ್ಲಿ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ, ಗುಬ್ಬಿ, ಶಿರಾ-ಕಳ್ಳಂಬೆಳ್ಳಾ ಮತ್ತು ಸುತ್ತಮುತ್ತಲಿನ ಗ್ರಾಮಗಳ ಕುಡಿಯುವ |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| | | ನೀರಿನ ಉದ್ದೇಶಕ್ಕಾಗಿ ಹೇಮಾವತಿ ಯೋಜನೆಯ ತುಮಕೂರು ಶಾಖಾ ನಾಲೆ ಕಿ.ಮಿ.106ರಲ್ಲಿ ಬರುವ ಎಸ್ಕೇಪ್‌ನಿಂದ 0.9 ಟಿ.ಎಂ.ಸಿ. ನೀರನ್ನು ಶಿರಾ–ಕಳ್ಳಂಬೆಳ್ಳ ನೈಸರ್ಗಿಕ ಕಣಿವೆಗೆ (Sira-Kallambella Natural valley) ಹರಿಸಲು ಆದೇಶಿಸಲಾಗಿರುತ್ತದೆ. ಇದರಂತೆ ಜಲಾಶಯದಲ್ಲಿನ ಹಾಗೂ ಮಳೆಗಾಲದಲ್ಲಿ ಹೆಚ್ಚಾಗಿ ಹರಿದು ಹೋಗುವ ನೀರಿನ ಲಭ್ಯತೆಯ ಆಧಾರದ ಮೇಲೆ ಕುಡಿಯುವ ನೀರಿಗಾಗಿ ನೀರನ್ನು ಹರಿಸಲಾಗುತ್ತಿರುತ್ತದೆ. ಮುಂದುವರೆದು ಮಳೆಗಾಲದಲ್ಲಿ ಹೆಚ್ಚಾಗಿ ಹರಿದು ಹೋಗುವ ನೀರಿನಲ್ಲಿ ಲಭ್ಯವಾಗುವ ನೀರಿನ ಪ್ರಮಾಣಕ್ಕೆ ಅನುಗುಣವಾಗಿ 0.9 ಟಿ.ಎಂ.ಸಿ. ನೀರನ್ನು ಎಸ್ಕೇಪ್‌ನಿಂದ ಕುಡಿಯುವ ನೀರಿಗಾಗಿ ಹರಿಸುವುದು ಮಾತ್ರ ಈ ಇಲಾಖೆಯ ಕಾರ್ಯವ್ಯಾಪ್ತಿಗೆ ಒಳಪಟ್ಟಿರುತ್ತದೆ. ಶಿರಾ–ಕಳ್ಳಂಬೆಳ್ಳಾ ನಗರಗಳಿಗೆ ಕುಡಿಯುವ ನೀರನ್ನು ಶಿರಾ–ಕಳ್ಳಂಬೆಳ್ಳ ನೈಸರ್ಗಿಕ ಕಣಿವೆಯಿಂದ ಸರಬರಾಜು ಮಾಡುವ ಜವಾಬ್ದಾರಿಯು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರದ್ದಾಗಿರುತ್ತದೆ. |
| ಇ) | ಭದ್ರಾ ಮೇಲ್ದಂಡೆ ನಾಲಾ ಯೋಜನೆ ಅಡಿಯಲ್ಲಿ ಶಿರಾ ತಾಲ್ಲೂಕಿನಲ್ಲಿ ಎಷ್ಟು ಕೆರೆಗಳು ಅಚ್ಚುಕಟ್ಟಿಗೆ ಒಳಪಡುತ್ತಿವೆ ಮತ್ತು ನೀರಾವರಿ ಒಳಪಡುವ ಕ್ಷೇತ್ರವೆಷ್ಟು; ಎಷ್ಟು ಗ್ರಾಮಗಳಿಗೆ ಕುಡಿಯುವ ನೀರಿನ ಯೋಜನೆಯನ್ನು ಅಳವಡಿಸಲಾಗುತ್ತದೆ; (ಸಂಪೂರ್ಣ ವಿವರ ನೀಡುವುದು) | ಮೇಲಿನ ಕಂಡಿಕೆ ಅ(I) ರಲ್ಲಿ ವಿವರಿಸಿರುವಂತೆ, ಭದ್ರಾ ಮೇಲ್ದಂಡೆ ಯೋಜನೆಯಡಿ ಶಿರಾ ತಾಲ್ಲೂಕಿನ 62 ಕೆರೆಗಳನ್ನು ಅವುಗಳ ಸಾಮರ್ಥ್ಯದ ಶೇ.50 ರಷ್ಟು ತುಂಬಿಸಲು ಹಾಗೂ 14,558 ಹೆಕ್ಟೇರ್ ಭೂ ಪ್ರದೇಶಕ್ಕೆ ಸೂಕ್ಷ್ಮ ನೀರಾವರಿ ಸೌಲಭ್ಯ ಕಲ್ಪಿಸಲು ಯೋಜಿಸಲಾಗಿದೆ. ಈ ಯೋಜನೆಯಡಿ ಕೆರೆಗಳಿಗೆ ನೀರು ತುಂಬಿಸಿ ಅಂತರ್ಜಲ ಮರುಪೂರಣಗೊಳಿಸಲು ಯೋಜಿಸಲಾಗಿದ್ದು, ಗ್ರಾಮವಾರು ಕುಡಿಯುವ ನೀರನ್ನು ಒದಗಿಸಲು ಅವಕಾಶ ಕಲ್ಪಿಸಿಕೊಂಡಿರುವುದಿಲ್ಲ. ವಿವರವನ್ನು **ಅನುಬಂಧ**ದಲ್ಲಿ ಲಗತ್ತಿಸಲಾಗಿದೆ. |
| ಈ) | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆ ಅಡಿಯಲ್ಲಿ ಶಿರಾ ತಾಲ್ಲೂಕಿನಲ್ಲಿ ಕುಡಿಯುವ ನೀರನ್ನು ಪೂರೈಕೆ ಮಾಡಲು ಗುರುತಿಸಿರುವ ಗ್ರಾಮಗಳೆಷ್ಟು; ಮತ್ತು ಕೆರೆಗಳೆಷ್ಟು; ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ಪೂರ್ಣ ವಿವರ ನೀಡುವುದು) | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆ ಅಡಿಯಲ್ಲಿ ಶಿರಾ ತಾಲ್ಲೂಕಿನಲ್ಲಿ ಬರುವ 234 ಗ್ರಾಮಗಳಿಗೆ ಕುಡಿಯುವ ನೀರನ್ನು ಸರಬರಾಜು ಮಾಡಲು 0.514 ಟಿ.ಎಂ.ಸಿ ನೀರನ್ನು ಹಂಚಿಕೆ ಮಾಡಲಾಗಿದ್ದು, ಸಂಬಂಧಿಸಿದ ಇಲಾಖೆಗೆ Bulk supply ಮೂಲಕ ನೀಡಲು ಯೋಜಿಸಲಾಗಿದೆ. ಕೆರೆಗಳನ್ನು ತುಂಬಿಸಲು ಯೋಜಿಸಲಾಗಿರುವುದಿಲ್ಲ.<br><br>ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಯ ಮೊದಲನೇ ಹಂತದ ಏತ ಕಾಮಗಾರಿಗಳು, ವಿದ್ಯುತ್ ಪೂರೈಕೆ ಕಾಮಗಾರಿಗಳು ಮತ್ತು ಎರಡನೇ ಹಂತದ ಗುರುತ್ವ ಕಾಲುವೆ ಸರಪಳಿ 0.00 ಕಿ.ಮೀ ನಿಂದ 260.00 ಕಿ.ಮೀ ವರೆಗಿನ ಕಾಮಗಾರಿಗಳು ವಿವಿಧ ಹಂತದ ಪ್ರಗತಿಯಲ್ಲಿದ್ದು, ಪ್ರಸಕ್ತ ಸಾಲಿನಲ್ಲಿ 33.00 ಕಿ.ಮೀ ವರೆಗಿನ ಗುರುತ್ವಾ ಕಾಲುವೆ ಕಾಮಗಾರಿಗಳನ್ನು ಪೂರ್ಣಗೊಳಿಸಿ ಮುಂಗಾರು 2021 ರಲ್ಲಿ ವೇದಾವತಿ ವ್ಯಾಲಿಗೆ ಪ್ರಾಯೋಗಿಕವಾಗಿ ನೀರು ಹರಿಸಲು ಯೋಜಿಸಲಾಗಿದೆ. |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
| --- | --- | --- |
| | | ಎತ್ತಿನಹೊಳೆ ಸಮಗ್ರ ಕುಡಿಯುವ ನೀರಿನ ಯೋಜನೆಗೆ ಹೊಸ ಭೂಸ್ವಾಧೀನ ಕಾಯ್ದೆ 2013 ರನ್ವಯ ಭೂಸ್ವಾಧೀನವನ್ನು ಮಾಡಲಾಗುತ್ತಿದ್ದು, ಸದರಿ ಯೋಜನೆಯಡಿಯಲ್ಲಿ ಕುಡಿಯುವ ನೀರೊದಗಿಸುವ, ಅಂತರ್ಜಲ ಮರುಪೂರ್ಣಗೊಳಿಸುವ, ನೀರಾವರಿ ಮತ್ತು ಕೆರೆ ತುಂಬಿಸುವ ಯೋಜನೆಯ ಉದ್ದೇಶವನ್ನು ಸಫಲಗೊಳಿಸಲು ಗುತ್ತಿಗೆದಾರರು ರೈತರ ಒಪ್ಪಿಗೆ ಪಡೆದು ಕಾಮಗಾರಿ ಪ್ರಾರಂಭಿಸಲು ಒಪ್ಪಂದ ಪತ್ರದಲ್ಲಿ ಷರತ್ತು ವಿಧಿಸಲಾಗಿದೆ. ಜೊತೆಗೆ ರೈತರು, ನಿಗಮ ಮತ್ತು ಗುತ್ತಿಗೆದಾರರ ನಡುವೆ ತ್ರಿಪಕ್ಷೀಯ ಕರಾರು ಒಪ್ಪಂದ ಮಾಡಿಕೊಂಡು ರೈತರ ಸಹಮತ ಪಡೆದು ಕಾಮಗಾರಿಗಳನ್ನು ನಿರ್ವಹಿಸುತ್ತಿರುವುದರಿಂದ ಯೋಜನೆಯಲ್ಲಿ ಪ್ರಗತಿ ಸಾಧಿಸಲು ಸಾಧ್ಯವಾಗಿರುತ್ತದೆ. |

**ಸಂಖ್ಯೆ: ಜಸಂಇ 19 ಡಬ್ಲ್ಯೂಎಲ್‌ಎ 2021**

(ಬಿ.ಎಸ್ ಯಡಿಯೂರಪ್ಪ)
ಮುಖ್ಯಮಂತ್ರಿ

ವಿಧಾನ ಪರಿಷತ್ತು ಸದಸ್ಯರಾದ ಶ್ರೀ ಕೆ.ಎ.ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) ಇವರ ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ: 669 ಕ್ಕೆ ಅನುಬಂಧ

ಕೆರೆಗಳ ವಿವರ ಈ ಕೆಳಗಿನಂತಿದೆ.

| SL NO. | NAME OF THE TANK | Name of Village | TALUK | TANK CAPACITY IN Mcft |
|---|---|---|---|---|
| 1 | KALLAMBELLA TANK | KALLAMBELLA | SIRA | 248.42 |
| 2 | DEVARAHALLI KERE | DEVARAHALLI | SIRA | 4.70 |
| 3 | AJJENAHALLI KERE | AJJENAHALLI | SIRA | 36.38 |
| 4 | BHUPASANDRA KERE | BHUPASANDRA | SIRA | 43.07 |
| 5 | DODDAGULA KERE | DODDAGULA | SIRA | 53.92 |
| 6 | YALIYURU KERE | YALIYURU | SIRA | 25.92 |
| 7 | BUVANAHALLI KERE | BUVANAHALLI | SIRA | 28.50 |
| 8 | LAKSHMISAGARA KERE | LAKSHMISAGARA | SIRA | 215.44 |
| 9 | BIDIRUKERE | BIDIRUKERE | SIRA | 13.44 |
| 10 | HALKUR KERE | HALKUR | SIRA | 28.79 |
| 11 | MAGODU KERE | MAGODU | SIRA | 103.43 |
| 12 | GULIGENAHALLI KERE | GULIGENAHALLI | SIRA | 12.09 |
| 13 | GIRINATHANAHALLI KERE | GIRINATHANAHALLI | SIRA | 6.80 |
| 14 | CHANNANAKUNTE KERE | CHANNANAKUNTE | SIRA | 20.68 |
| 15 | KOTTA DODDAKERE | KOTTA DODDA | SIRA | 55.49 |
| 16 | MADULUR CHIKKAKERE | MADULUR | SIRA | 36.12 |
| 17 | MADULUR DODDAKERE | MADULUR | SIRA | 286.12 |
| 18 | NADUR DODDAKERE | NADUR | SIRA | 41.28 |
| 19 | MELKUNTE KERE | MELKUNTE | SIRA | 14.39 |
| 20 | KAGGALADU KERE | KAGGALADU | SIRA | 31.35 |
| 21 | HEMMADORE DODDAKERE | HEMMADORE | SIRA | 23.51 |
| 22 | HOSALUR(Bevinahalli) | HOSALUR(Bevinahalli) | SIRA | 7.83 |
| 23 | HOSUR DODDAKERE (Gollarahatti) | HOSUR (Gollarahatti) | SIRA | 120.72 |
| 24 | HANDIKUNTE KERE | HANDIKUNTE | SIRA | 28.34 |
| 25 | BADAMARANAHALLI KERE | BADAMARANAHALLI | SIRA | 26.20 |
| 26 | HAROGERE KERE | HAROGERE | SIRA | 13.00 |
| 27 | KAMAGONDANAHALLI DODDAKERE | KAMAGONDANAHALLI | SIRA | 12.20 |
| 28 | KOTTI KERE | KOTTI | SIRA | 18.57 |
| 29 | ENJALAGERE | ENJALAGERE | SIRA | 16.30 |
| 30 | CHENGAVARA KERE | CHENGAVARA | SIRA | 41.28 |

| | | | | |
|---|---|---|---|---|
| 31 | GOPIKUNTE | GOPIKUNTE | SIRA | 13.08 |
| 32 | BARGUR KERE | BARGUR | SIRA | 79.04 |
| 33 | DODDA HULIKUNTE KERE | DODDA HULIKUNTE | SIRA | 80.86 |
| 34 | CHIKKABANAGERE | CHIKKABANAGERE | SIRA | 73.58 |
| 35 | DODDABANAGERE KERE | DODDABANAGERE | SIRA | 178.10 |
| 36 | NIDAGHATTA KERE | NIDAGHATTA | SIRA | 23.66 |
| 37 | NEJANTI KERE | NEJANTI | SIRA | 28.86 |
| 38 | TADAKALURU KERE | TADAKALURU | SIRA | 23.66 |
| 39 | DHARMAPURA | DHARMAPURA | Hiriyur | 300 |
| 40 | Ratnasandra | Ratnasandra | SIRA | 5.230 |
| 41 | Uramundinakere | Bhuvanahalli | SIRA | 23.520 |
| 42 | Thimmajjikatte | Bhuvanahalli | SIRA | 20.000 |
| 43 | Kallukote | Kallukote | SIRA | 18.570 |
| 44 | Nayagere | Nayagere | SIRA | 11.510 |
| 45 | Vojukunte | Vojukunte | SIRA | 12.500 |
| 46 | Anupanahalli | Anupanahalli | SIRA | 3.140 |
| 47 | GollahallySannakere | Gollahally | SIRA | 5.230 |
| 48 | Badakanahalli | Badakanahalli | SIRA | 2.610 |
| 49 | Hosakere | Hosakere | SIRA | 25.776 |
| 50 | BommagondanahalliKodagikere | Bommagondanahalli | SIRA | 39.572 |
| 51 | Ikkanur | Ikkanur | Hiriyur | 104.530 |
| 52 | Kodihalli | Kodihalli | Hiriyur | 78.530 |
| 53 | S-58 | Gundappanachikkenahalli | SIRA | 76.853 |
| 54 | S-55 | Kamagondanahalli | SIRA | 110.221 |
| 55 | Veerapura | Veerapura | SIRA | 22.099 |
| 56 | S33 | Marihalli | SIRA | 32.850 |
| 57 | Ramanahalli | Ramanahalli | SIRA | 4.960 |
| 58 | DasarahalliSannakere | Dasarahalli | SIRA | 30.676 |
| 59 | KaligondanahalliSannakere | Kaligondanahalli | SIRA | 33.354 |
| 60 | S39 | Baragurpalya | SIRA | 30.610 |
| 61 | HosahalliSannakere | Hosahalli | SIRA | 7.310 |
| 62 | Karehalli | Karehalli | SIRA | 14.040 |
| 63 | Deverakere | Deverakere | SIRA | 74.150 |
| 64 | Rangapura | Rangapura | SIRA | 2.280 |
| 65 | Chikkasandra | Chikkasandra | SIRA | 245.540 |
| | | | | **3450.781** |